# ಮುಂಜಾವು

ವಾರಪತ್ರಿಕೆ.

ಸಂಪಾದಕ: ನಿಡಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 114

8ನೇ ವರ್ಷ 38ನೇ ಸಂಚಿಕೆ ಕೊಪ್ಪ 20-5-1990 ಭಾನುವಾರ ಬೆಲೆ 60 ಪೈಸೆ


## ಜಯಪುರದಲ್ಲಿ ಕಳ್ಳರ ಹಾವಳಿ ಶುರು

ಜಯಪುರ : ಇಲ್ಲಿನ ಪದ್ಮಾ ಚಿತ್ರ ಮಂದಿರದಲ್ಲಿ ಮೇ 13 ರ ಬೆಳಗಿನ ಜಾವ ನಾಲ್ಕೂವರೆ ಗಂಟೆ ಹೊತ್ತಿಗೆ ಹಿಂಬಾಗಿಲಿನಿಂದ ಕಳ್ಳರು ನುಗ್ಗಿದಾಗ ಒಳಗೆ ಮಲಗಿದ್ದ ವ್ಯಕ್ತಿ ಗಾಬರಿಯಿಂದ ಮುಂಬಾಗಿಲು ತೆಗೆದು ಬೊಬ್ಬೆ ಹೊಡೆಯಲಾಗಿ, ಸುತ್ತ ಮುತ್ತಲ ಜನ ಸೇರುವಷ್ಟರಲ್ಲಿ ಕಳ್ಳರು ಪರಾರಿಯಾಗಿದ್ದರು.

ಇದು ಇಲ್ಲಿನ ನಾಗರಿಕರಲ್ಲಿ ಆತಂಕ ಹುಟ್ಟಿಸಿದೆ. ಅಂಗಡಿಗಳವರು, ಒಂಟಿ ಮನೆಗಳವರು ಮುಖ್ಯವಾಗಿ ಹೆಚ್ಚು ಎಚ್ಚರಿಕೆಯಿಂದಿರುವುದು ಕ್ಷೇಮ.

(ವರದಿ : ಡಿ ಡಿ. ಡಿ'ಸೋಜ)

## ಗೇಣಿದಾರರ ವಿರುದ್ಧ ಜಪ್ತಿ ಕ್ರಮ ಕೈಬಿಡಲು ಆಗ್ರಹ

**ಕೊಪ್ಪ : ಭೂಸುಧಾರಣೆ ಕಾಯ್ದೆ ಪ್ರಯೋಜನದಾರರಾದ ಮಾಜಿ ಗೇಣಿದಾರರಿಂದ ಪ್ರೀಮಿಯಂ ಹಣದ ಬಾಕಿಯನ್ನು ಒಂದೇ ಗಂಟಿನಲ್ಲಿ ವಸೂಲು ಮಾಡುವ ಹಾಗೂ ಕೊಡಲಾರದವರ ಮನೆ ಜಪ್ತಿ ಮಾಡುವ ಕ್ರಮ ಕೈ ಬಿಟ್ಟು, ಬಾಕಿ ಮನ್ನಾ ಅಥವಾ ಕಂತು ನೀಡಬೇಕೆಂದು ಮಾಜಿ ಗೇಣಿದಾರರುಗಳು ಸರ್ಕಾರಕ್ಕೆ ಮನವಿ ಸಲ್ಲಿಸಿದ್ದಾರೆ.**

ಈ ಕಾಯ್ದೆ ಜಾರಿಗೆ ಬಂದಾಗಿನಿಂದ ಕಂತಿನ ಹಣವನ್ನು ಕ್ರಮವಾಗಿ ವಸೂಲು ಮಾಡಲಿಲ್ಲ. ಈ ಮಧ್ಯೆ ಹಿಂದಿನ ಸರ್ಕಾರ 10 ಸಾವಿರ ರೂ ವರೆಗಿನ ಪ್ರೀಮಿಯಂ ಬಾಕಿಯನ್ನು ರದ್ದು ಮಾಡುವುದಾಗಿ ಸಹ ಹೇಳಿಕೆ ನೀಡಿತ್ತು. ಈ ಎಲ್ಲ ಕಾರಣಗಳಿಂದ ಕಂತುಗಳು ಬಾಕಿಯಾಗಿವೆ.

ಆದರೆ ಕಾಯ್ದೆ ಪ್ರಕಾರ 15 ಕಂತುಗಳಿಗೆ ಅವಕಾಶವಿದ್ದರೂ, ಈವರೆಗಿನ ಕಂತುಗಳನ್ನು ಮಾತ್ರವಲ್ಲದೆ ಮುಂದಿನ ಕಂತುಗಳನ್ನು ಸಹ ಒಂದೇ ಗಂಟಿನಲ್ಲಿ ಕಟ್ಟಲು ತಗಾದೆ ಮಾಡಿ, ಕಟ್ಟಲಾಗದವರ ವಿರುದ್ಧ ಜಪ್ತಿ ಕ್ರಮವನ್ನೂ ಆರಂಭಿಸಲಾಗಿದೆ

ಕಳೆದ ಮಳೆಗಾಲ ತಂದೊಡ್ಡಿದ ಸಂಕಷ್ಟಗಳಿಂದ ಚೇತರಿಸಿಕೊಳ್ಳಲಾಗದ ರೈತರು ಈಚೆಗೆ ಶೃಂಗೇರಿಯಲ್ಲಿ ಮುಖ್ಯ ಮಂತ್ರಿಯವರಿಗೆ ಮನವಿ ಸಲ್ಲಿಸಿದಾಗ, 10 ಸಾವಿರ ರೂ. ಒಳಗಿನ ಸಾಲ ಮತ್ತು ಬಾಕಿಗಳನ್ನು ಬಲಾತ್ಕಾರವಾಗಿ ವಸೂಲು ಮಾಡದಿರುವಂತೆ ಅಧಿಕಾರಿಗಳಿಗೆ ಸೂಚಿಸುವುದಾಗಿ ಹೇಳಿಕೆ ನೀಡಿದ್ದರು.

ಈಗಾಗಲೇ ಬಹುತೇಕ ರೈತರು ಪ್ರೀಮಿಯಂನ ಬಹು ಅಂಶವನ್ನು ಕಟ್ಟಿಯಾಗಿದೆ. ಉಳಿದ ಅಲ್ಪ-ಸ್ವಲ್ಪ ಹಣದ ವಸೂಲಾತಿಯನ್ನು ಮನ್ನಾ ಮಾಡಬೇಕೆಂದೂ, ಬಡ ರೈತರೆಂದು ಸಹ ಲೆಕ್ಕಿಸದೆ ದಬ್ಬಾಳಿಕೆಯಿಂದ ಆರಂಭಿಸಿರುವ ವಸೂಲಾತಿ/ಜಪ್ತಿ ಕ್ರಮಗಳನ್ನು ಕೈಬಿಡಬೇಕೆಂದೂ ಮನವಿಯಲ್ಲಿ ರೈತರು ಕೋರಿದ್ದಾರೆ.

ಈ ಮಧ್ಯೆ, ಕೃಷಿ ಮತ್ತು ತೋಟಗಾರಿಕೆ ಸಚಿವ ಎಸ್. ಬಂಗಾರಪ್ಪ, 10 ಎಕರೆಯೊಳಗಿನ ರೈತರ ಬಗ್ಗೆ ಮತ್ತು ಗೇಣಿದಾರರ ಪ್ರೀಮಿಯಂ ಬಗ್ಗೆ ಸರ್ಕಾರ ಯಾವುದೇ ಕ್ರಮ ಕೈಗೊಳ್ಳದೆಂದು ಶಿವಮೊಗ್ಗದಲ್ಲಿ ಮತ್ತೆ ಆಶ್ವಾಸನೆ ನೀಡಿದ್ದಾರೆ.

## ಹರಿಹರಪುರದಲ್ಲಿ ಉಚಿತ ಬೇಸಿಗೆ ಶಿಬಿರ

ಹರಿಹರಪುರ : ಏಳರಿಂದ 8ನೇ-ತರಗತಿಗೆ ಪ್ರವೇಶಿಸುತ್ತಿರುವ ಮಕ್ಕಳಿಗಾಗಿ ಇಲ್ಲಿನ ರಾಷ್ಟ್ರೋತ್ಥಾನ ಬಳಗ ಏರ್ಪಡಿಸಿರುವ ಉಚಿತ **ಬೇಸಿಗೆ ಶಿಬಿರ** ಈ ಹಿಂದೆ ಪ್ರಕಟಿಸಿದ್ದಂತೆ ಮೇ 20ರ ಬದಲು ಮೇ 21 ರಿಂದ 30 ರವರೆಗೆ ಕಿರಿಯ ಕಾಲೇಜು ಆವರಣದಲ್ಲಿ ಪ್ರತಿ ದಿನ ಬೆಳಗ್ಗೆ 9 30ರಿಂದ 12.30 ರವರೆಗೆ ನಡೆಯುತ್ತದೆ. ಆಸಕ್ತ ವಿದ್ಯಾರ್ಥಿಗಳು 22 ಅಥವಾ 23 ರಂದು ಕೂಡ ಸೇರಿಕೊಳ್ಳಬಹುದೆಂದು ವ್ಯವಸ್ಥಾಪಕರು ತಿಳಿಸಿದ್ದಾರೆ.

### ಕೊಲೆ ಶಂಕೆ

ಶೃಂಗೇರಿ: ಕೋಗಿನವೈಲು ಯೋಗೇಂದ್ರ ನಾಯ್ಕ ತಮ್ಮ ಮನೆಯಲ್ಲಿ ಮೃತಪಟ್ಟಿದ್ದು, ತಲೆಗೆ ಗಾಯವಾಗಿ ರಕ್ತ ಕಂಡು ಬಂದಿದೆ ಎಂಬ ಸುದ್ದಿ ಹರಡಿದ್ದು, ಕೊಲೆಯಿರಬಹುದೆಂಬ ಶಂಕೆ ಇಲ್ಲಿ ಹರಡಿದೆ. ವಿವರ ತಿಳಿಯಲು ಪೋಲೀಸ್ ಅಧಿಕಾರಿಗಳು ಸಿಕ್ಕಲಿಲ್ಲ.

### ಹರಿಹರಪುರ : 2 ಪ್ರಕರಣ

ಹರಿಹರಪುರ : ತೀರ್ಥಮುತ್ತೂರಿನಿಂದ ಬಿಳುಮುಡಿ ಕಡೆಗೆ ಬರುತ್ತಿದ್ದ ಗೀತಾ ಎಂಬ ಯುವತಿಯ ಮೇಲೆ ಅತ್ಯಾಚಾರಕ್ಕೆ ಯತ್ನಿಸಿದ ನಾಗರಾಜ ಎಂಬವನನ್ನು ಇಲ್ಲಿನ ಠಾಣಾಧಿಕಾರಿ ಟಿ. ಆರ್. ಮಂಜುನಾಥಯ್ಯ ಬಂಧಿಸಿ ನ್ಯಾಯಾಂಗ ಬಂಧನಕ್ಕೊಳಪಡಿಸಿದ್ದಾರೆ.

ಮೇ 2ರಂದು ಸಾರ್ವೆಯ ಮರಿಯ (ಕರಿಯ) ಎಂಬ ಹರಿಜನ ವ್ಯಕ್ತಿಯನ್ನು ಗಸ್ತಿನ ಪೋಲೀಸರು ಅನುಮಾನದ ಮೇಲೆ ಬಂಧಿಸಿ, ಒಂದು ತಾಮ್ರದ ಕೊಡವನ್ನು ವಶಪಡಿಸಿಕೊಂಡಿದ್ದಾರೆ.

### ತೀರ್ಥಹಳ್ಳಿಗೆ ಜೂನ್ ಮೊದಲ ವಾರ ತಪಸ್

ತೀರ್ಥಹಳ್ಳಿ : ಇಲ್ಲಿ ಮೇ 18ರಂದು ಏರ್ಪಡಿಸಿದ್ದ ನೈಸರ್ಗಿಕ ಕೃಷಿ ವಿಚಾರ ಸಂಕಿರಣದಲ್ಲಿ ಪ್ರದೀಪ್ ತಪಸ್‌ರವರು ಅನಾರೋಗ್ಯದಿಂದ ಭಾಗವಹಿಸಲಾಗದೆ, ಜೂನ್ ಮೊದಲ ವಾರ ಪುನಃ ಕಾರ್ಯಕ್ರಮ ಏರ್ಪಡಿಸಲಾಗುವುದು.

### ಹೆಗ್ಗೋಡಲ್ಲಿ ನಾಟಕೋತ್ಸವ

ಹೆಗ್ಗೋಡು : ಇಲ್ಲಿನ ರಂಗ ಶಿಕ್ಷಣ ಕೇಂದ್ರ 10 ವರ್ಷ ಮುಗಿಸಿದ ಸವಿನೆನಪಿಗಾಗಿ ಮೇ 26 ರಿಂದ 30ರವರೆಗೆ ನಾಟಕೋತ್ಸವ ಏರ್ಪಟ್ಟಿದೆ.

### ಸೀಸೆಯಲ್ಲೇ ಸಾರಾಯಿ ಪೂರೈಸಲು ಒತ್ತಾಯ

ಕೊಪ್ಪ : ಸಾರಾಯಿಯ ನೂತನ ಗುತ್ತಿಗೆದಾರರು ಸಾರಾಯಿ ಮಾರಾಟಕ್ಕೆ ...ಗ ಅದರಲ್ಲಿ ನಿರತರಾಗಿರುವವರನ್ನೇ ಮುಂದುವರಿಸಬೇಕೆಂದು ಕೊಪ್ಪ, ಶೃಂಗೇರಿ, ...ರಾ. ಪುರ ತಾ॥ ಗಳ ಸಾರಾಯಿ ಮಾರಾಟಗಾರರ ಸಂಘ ಒತ್ತಾಯಿಸಿದೆ.

ಪ್ಲಾಸ್ಟಿಕ್ ಚೀಲದಲ್ಲಿ ಪೂರೈಸಲ್ಪಡುವ ಸಾರಾಯಿಯಲ್ಲಿ ಹಲವು ತಾಂತ್ರಿಕ ದೋಷ ...ರುವುದರಿಂದ ಹಿಂದಿನಂತೆ ಸೀಸೆಯಲ್ಲೇ ಸರಬರಾಜು ಮಾಡಬೇಕೆಂದೂ, ಮಾರಾಟದ ರಹದಾರಿ ಇಲ್ಲದ ಅಂಗಡಿಗಳಲ್ಲಿ ಸಾರಾಯಿ ಮಾರಾಟವನ್ನು ಕಟ್ಟುನಿಟ್ಟಾಗಿ ...ಸಬೇಕೆಂದೂ ಸಂಘ ಸರ್ಕಾರವನ್ನು ಒತ್ತಾಯಿಸಿದೆ.

### ನೇಣು ಹಾಕಿಕೊಂಡವನ ದಿಢೀರ್ ಶವ ಸಂಸ್ಕಾರ : ...ಬ್ಬರ ಮೇಲೆ ಮೊಕದ್ದಮೆ

ಹರಿಹರಪುರ : ಇಲ್ಲಿಗೆ ಸಮೀಪದ ...ಡವಳ್ಳಿಯಲ್ಲಿ 1 ತಿಂಗಳ ಹಿಂದೆ ...ಣು ಹಾಕಿಕೊಂಡು ಆತ್ಮಹತ್ಯೆ ಮಾಡಿ...ಕೊಂಡ ನನ್ನಲ್ಲದ ಸುಧಾಕರ ಪೂಜಾರಿಯನ್ನು ಪೋಲೀಸರಿಗೆ ತಿಳಿಸದೆ ದಹನ ...ಸಿದ ಬಗ್ಗೆ ಮೃತನ ತಂದೆ ನಾರಾಯಣ ಪೂಜಾರಿ ಹಾಗೂ ಪುಟ್ಟೇಗೌಡ, ಉದಯ ಮತ್ತು ವಿ. ಡಿ. ನಾಗರಾಜ ಇವರ ವಿರುದ್ಧ ಇಲ್ಲಿನ ಠಾಣಾಧಿಕಾರಿಗಳು ಮೊಕದ್ದಮೆ ದಾಖಲಿಸಿದ್ದು, ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್ ತನಿಖೆ ಮುಂದುವರಿಸಿದ್ದಾರೆ.

## ಸರ್ಕಾರದ ಅನುಮತಿ ಪಡೆಯದ ಶಾಲೆಗಳು

ಕೊಪ್ಪ : ಸರ್ಕಾರ ಅಥವಾ ಶಿಕ್ಷಣ ಇಲಾಖೆಯಿಂದ ಅನುಮತಿ ಪಡೆಯದಿರುವ ಶಾಲೆಗಳ ಪಟ್ಟಿಯನ್ನು ಜಿಲ್ಲಾ ಶಿಕ್ಷಣ ಇಲಾಖೆ ಪ್ರಕಟಿಸಿದ್ದು, ಪೋಷಕರು ತಮ್ಮ ಮಕ್ಕಳನ್ನು ಈ ಶಾಲೆಗಳಿಗೆ ಸೇರಿಸಬಾರದೆಂದೂ, ಸೇರಿಸಿದ್ದಲ್ಲಿ ಬೇರೆ ಅಧಿಕೃತ ಶಾಲೆಗಳಿಗೆ ಸೇರಿಸಬೇಕೆಂದೂ ತಿಳಿಸಲಾಗಿದೆ. ಈ ಬಗ್ಗೆ ತಾ॥ ಎ.ಇ.ಒ.ಗಳಿಂದ ನೆರವು ಪಡೆಯಬಹುದೆಂದೂ ತಿಳಿಸಲಾಗಿದೆ.

ಕೊಪ್ಪದ ಶಾರದಾ ವಿದ್ಯಾ ಮಂದಿರ, ಜಯಪುರದ ಪಾಂಚಜನ್ಯ ಶಾಲೆ, ಶೃಂಗೇರಿಯ ದರ್ಶಿನಿ ಶಾಲೆ ಮತ್ತು ಕಾಫಿ ಸಂಶೋಧನಾ ಕೇಂದ್ರದ ಸಿ. ಬಿ. ಎಸ್. ಸಿ ಶಾಲೆ ಇವೂ ಈ ಪಟ್ಟಿಯಲ್ಲಿ ಸೇರಿವೆ.

### ಕಲಾರಂಗ ವಾರ್ಷಿಕೋತ್ಸವ

ಶೃಂಗೇರಿ : ಇಲ್ಲಿನ 'ಕಲಾರಂಗ' ದ ವಾರ್ಷಿಕೋತ್ಸವ ಚಲನ ಚಿತ್ರ ನಿರ್ದೇಶಕ ಕೋಡ್ಲು ರಾಮಕೃಷ್ಣರ ಅಧ್ಯಕ್ಷತೆಯಲ್ಲಿ ಈಚೆಗೆ ನಡೆಯಿತು. ಭಾಗ್ಯಶ್ರೀ ಮಾಲೀಕರಾದ ಲಕ್ಷ್ಮೀರಮಣರವರು ಅತಿಥಿಗಳಾಗಿದ್ದರು. ಕಲಾರಂಗ ಹೊರ ತಂದಿರುವ 'ಅಂಬೆ' ನಾಟಕದ ಕ್ಯಾಸೆಟ್ಟಿಗೆ ಧ್ವನಿ ನೀಡಿದ ಕಲಾವಿದರುಗಳಿಗೆ ನೆನಪಿನ ಕಾಣಿಕೆಗಳನ್ನು ನೀಡಲಾಯಿತು.

ನಂತರ ಸೀಮಿತ ಪ್ರೇಕ್ಷಕರೆದುರು ರಂಗದ ಕಲಾವಿದರು 'ಅಂಬೆ' ನಾಟಕವನ್ನು ಅಭಿನಯಿಸಿದರು

(ವರದಿ : ವೈ. ಗ. ಜಗದೀಶ್.)



## ಶ್ರದ್ಧಾಂಜಲಿ

ಕೊಪ್ಪ ಮೇಲಿನಪೇಟೆ ವಾಸಿಯಾಗಿದ್ದ ದಿ॥ ಚಂದು ಶೆಟ್ಟಿಯವರ ಮಗನಾದ ಹಾಗೂ ಕೊಪ್ಪದ ಸರ್ಕಾರಿ ಕಿರಿಯ ಕಾಲೇಜಿನಲ್ಲಿ ಉದ್ಯೋಗಿಯಾಗಿದ್ದ

**ಶ್ರೀ ಕೆ. ಸಿ. ಭುಜಂಗ ಶೆಟ್ಟಿಯವರು**

ದಿನಾಂಕ. 9-5-1990 ನೇ ಬುಧವಾರ ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ.

ದೀರ್ಘ ಕಾಲದಿಂದಲೂ ಹೊಟ್ಟೆನೋವಿನ ಕಾಯಿಲೆಯಿಂದ ಬಳಲುತ್ತಿದ್ದ ಶ್ರೀಯುತರು ಎರಡು ಬಾರಿ ತೀವ್ರ ಅಸ್ವಸ್ಥರಾಗಿ ಆಸ್ಪತ್ರೆಗಳಲ್ಲಿ ಸೂಕ್ತ ಚಿಕಿತ್ಸೆ ಪಡೆದು ಬಹು ಕಷ್ಟದಿಂದ ಬದುಕಿ ಉಳಿದಿದ್ದರು. ಇಡೀ ಕೊಪ್ಪ ಪೇಟೆಯಲ್ಲಿ ಬಡವ-ಬಲ್ಲಿದ ಎನ್ನದೆ ಪ್ರತಿಯೊಬ್ಬರಿಗೂ ಪ್ರೀತಿ ಪಾತ್ರರಾಗಿದ್ದ ಶ್ರೀಯುತರ ಆತ್ಮಕ್ಕೆ ಚಿರ ಶಾಂತಿಯನ್ನು ಕೋರುತ್ತೇವೆ

ಶ್ರೀಮತಿ ಮತ್ತು ಶ್ರೀ ಆನಂದ ಶೆಟ್ಟಿ ಮತ್ತು ಮಕ್ಕಳು,
ರಚಿತ್ ಬಾರ್ ಅಂಡ್ ರೆಸ್ಟೋರೆಂಟ್,
ಮೇಲಿನಪೇಟೆ, ಕೊಪ್ಪ.

# ಕೃಷಿಕರ ಅನುಭವವೇ ಕೃಷಿ ಪತ್ರಿಕೆಗಳ ಬಂಡವಾಳ

— ಅಡಿಕೆ ಪತ್ರಿಕೆ ಸಂಪಾದಕ 'ಶ್ರೀ' ಪಡ್ರೆ.

**ಶಿಸ್ತುಬದ್ಧವಾಗಿ ಹಾಗೂ ಕ್ರಮವರಿತು ಕೃಷಿ ಮಾಡಲು ಸಿದ್ಧರಿರುವ ಅಡಿಕೆ ಬೆಳೆಗಾರರ ವಲಯದಲ್ಲಿ ಕೇವಲ ಒಂದೂವರೆ ವರ್ಷದೊಳಗೆ ಅಪಾರ ಜನಪ್ರಿಯತೆ ಗಳಿಸಿರುವ ಕೃಷಿ ಮಾಧ್ಯಮ 'ಅಡಿಕೆ ಪತ್ರಿಕೆ': ಇದರ ಸಂಪಾದಕರೂ ಸ್ವತಃ ಅಡಿಕೆ ಬೆಳೆಗಾರರೂ ಆದ 'ಶ್ರೀ' ಪಡ್ರೆಯವರಿಗೆ ಬೆಳೆಗಾರರೊಂದಿಗೆ ವಿಚಾರ ವಿನಿಮಯಕ್ಕೆ, ಅನುಭವ ಹಂಚಿಕೊಳ್ಳುವುದಕ್ಕೆ ಏನೊಂದು ಸಣ್ಣ ನೆಪ ಸಿಕ್ಕರೂ ಸಾಕು.**

**ಅಂಥದೊಂದು 'ವಿಚಾರ ವಿನಿಮಯ ಸಭೆ' ಮೇ 8ರಂದು ಕೊಪ್ಪದ ಬಳಿ ನಡೆಯಿತು. ಸೇರಿದ್ದ ಸುಮಾರು 50 60ಮಂದಿ ಕೃಷಿಕರ ಆಸಕ್ತಿ, ವಿಚಾರ ವಿನಿಮಯದ ತವಕ ಎಷ್ಟಿತ್ತೆಂದರೆ, ಅದನ್ನು ತಣಿಸಲಿಕ್ಕಲ್ಲ, ಮೊಟಕು ಗೊಳಿಸಬೇಕಾದರೂ ಸಂಜೆಗತ್ತಲೇ ಕವಿಯಬೇಕಾಯಿತು.**

ಬೇರೆ ಪತ್ರಿಕೆಗಳನ್ನು ಓದಿ ಬದಿಗಿಟ್ಟರೆ ಸಾಕಾಗುತ್ತದೆ. ಆದರೆ ಕೃಷಿ ಪತ್ರಿಕೆಗಳ ವಿಷಯ ಹಾಗಲ್ಲ. ರೈತರು ಅದರಲ್ಲಿ ತೊಡಗಿಸಿಕೊಳ್ಳಬೇಕಾಗುತ್ತದೆ. ಆಗ ಮಾತ್ರ ಕೃಷಿ ಪತ್ರಿಕೆಗಳ ಪ್ರಕಟಣೆಯ ಉದ್ದೇಶವೂ ಅವನ್ನು ತರಿಸಿದ ಉದ್ದೇಶವೂ — ಈ ಎರಡೂ ಈಡೇರಿದಂತಾಗುವುದು ಎಂದು ಸುಪ್ರಸಿದ್ಧ ಕೃಷಿ ಪತ್ರಿಕೆಯಾದ 'ಅಡಿಕೆ ಪತ್ರಿಕೆ' ಸಂಪಾದಕ 'ಶ್ರೀ' ಪಡ್ರೆ ಇಲ್ಲಿ ಹೇಳಿದರು.

ಕೊಪ್ಪದ ಸಿಂಡಿಕೇಟ್ ಬ್ಯಾಂಕ್, ಕೃಷಿ ವಿಚಾರ ವಿನಿಮಯ ಕೇಂದ್ರ ಮತ್ತು ಕೊಪ್ಪ ಜೇಸಿ ಸಂಯುಕ್ತವಾಗಿ ಹರಂದೂರು ಅನಂತ ಭಟ್ಟರ ಮನೆಯಲ್ಲಿ ಏರ್ಪಡಿಸಿದ್ದ "ಪತ್ರಿಕಾ ಮಾಧ್ಯಮದ ಮಹತ್ವ ಮತ್ತು ಅಡಿಕೆ ಪತ್ರಿಕೆ" ಎಂಬ ವಿಚಾರ ವಿನಿಮಯ ಕಾರ್ಯಕ್ರಮದಲ್ಲಿ ಅವರು ಮಾತನಾಡುತ್ತಿದ್ದರು.

ಕೃಷಿ ಪತ್ರಿಕೆಗಳನ್ನು ಮೊದಲಿಗೆ ಕೃಷಿಕರು ಕೊಳ್ಳಬೇಕು; ಬರೀ ಪ್ರತಿಷ್ಠೆಗೆಂಬಂತೆ ಕೊಂಡರೆ ಸಾಲದು, ಅವನ್ನು ಆಸಕ್ತಿ ಕೊಟ್ಟು ಓದಬೇಕು; ಮೂರನೆಯದಾಗಿ, ಅವುಗಳಲ್ಲಿರುವ ವಿಚಾರಗಳನ್ನು, ಬೇರೆಯವರ ಅನುಭವಗಳನ್ನು ತಾವೂ ಅನುಷ್ಠಾನಕ್ಕೆ ತರಬೇಕು. ಹೀಗೆ ಮಾಡಿದರೆ ಮಾತ್ರ ಕೃಷಿ ಮಾಧ್ಯಮದ ಸದುಪಯೋಗವಾಗುತ್ತದೆ ಇಲ್ಲವಾದರೆ ಎಲ್ಲವೂ ವ್ಯರ್ಥ ಎಂದು ಅವರು, ಕೃಷಿ ಮಾಧ್ಯಮದ ಉಪಯುಕ್ತತೆಯ 3 ಹಂತಗಳನ್ನು ವರ್ಣಿಸಿದರು.

### ಶುಷ್ಕ ಕೃಷಿ ಪತ್ರಿಕೆಗಳು

ದೇಶದ ವಿವಿಧೆಡೆಗಳ ಕೃಷಿ ವಿಶ್ವವಿದ್ಯಾಲಯಗಳಿಂದಲೂ ವಿವಿಧ ಸಂಶೋಧನಾ ಕೇಂದ್ರಗಳಿಂದಲೂ ಪ್ರಕಟವಾಗುತ್ತಿರುವ ಅಸಂಖ್ಯ ಕೃಷಿ ಪತ್ರಿಕೆಗಳ ಗುಣ–ದೋಷಗಳನ್ನು 'ಶ್ರೀ' ಪಡ್ರೆ ಮೊದಲಿಗೆ ಪಟ್ಟಿ ಮಾಡುತ್ತ, ಅಂಥ ಬಹಳಷ್ಟು ಪತ್ರಿಕೆಗಳು ಕೃಷಿಕನ ಬಗೆಗೆ ಇರಬೇಕಾದಂಥ ಆತ್ಮೀಯತೆ, ಅವಿನಾಭಾವಗಳನ್ನೇ ಕಳೆದುಕೊಂಡು ಶುಷ್ಕವಾಗಿರುತ್ತವೆ. ಬಹಳಷ್ಟು ಸಂದರ್ಭಗಳಲ್ಲಿ ಅವುಗಳಲ್ಲಿನ ಲೇಖನಗಳೆಂದರೆ ಕೇವಲ ಗೊಬ್ಬರ, ಕ್ರಿಮಿನಾಶಕ, ಬೀಜ, ಯಂತ್ರೋಪಕರಣ ಮುಂತಾದುವುಗಳ ಪೂರೈಕೆದಾರರ [illegible]ಗಳೇ ಆಗಿರುತ್ತವೆ ಎಂದು ವಿ[illegible]ಸಿದರು.

### ಉತ್ಪ್ರೇಕ್ಷೆ, ಪ್ರತಿಷ್ಠೆ

[illegible]ಲ್ಲಿ ಪ್ರಕಟವಾಗುವ ಹಲವಾರು ಬಗೆಯ ಬೆಳೆಗಳು ತಳಗಳು ಮತ್ತು ಕೃಷಿ ಉತ್ಪನ್ನಗಳ ಉಪಯುಕ್ತತೆ ಬಗ್ಗೆ ಬಹಳ ಉತ್ಪ್ರೇಕ್ಷಿತವಾಗಿ ಬರೆದಿರುತ್ತದೆ. ಅವುಗಳ ನಿಜವಾದ ಮೌಲ್ಯಮಾಪನ ಇರುವುದಿಲ್ಲ. ಎಲ್ಲವಕ್ಕೂ ಬಣ್ಣ ಕಟ್ಟಿ 'ಕೃಷಿಕನಿಗೆ ವರದಾನ' ಎಂದು ಬಣ್ಣಿಸುತ್ತಾರೆ. ಆದರಲ್ಲಿ ಕೃಷಿಕನಿಗೆ ಬಹು ಪ್ರಾಮುಖ್ಯವಾದ ಮಾರುಕಟ್ಟೆ ಮಾಹಿತಿಯೇ ಇರುವುದಿಲ್ಲ. ವಸ್ತುಸ್ಥಿತಿಯನ್ನು ಎಷ್ಟೋ ಬಾರಿ ಮರೆಮಾಚುತ್ತಾರೆ ಅಥವಾ ಸಾಧಕ–ಬಾಧಕಗಳೆರಡನ್ನೂ ವಿವರಿಸದೆ, ಕೇವಲ ಉಪಯೋಗದ ಮಗ್ಗುಲನ್ನು ಮಾತ್ರ ವರ್ಣಿಸಿರುತ್ತಾರೆ. ಎಷ್ಟೋ ವಿಚಾರಗಳು ಬಹಳ ಅಪ್ರಾಯೋಗಿಕವಾಗಿರುತ್ತವೆ; ರೈತರ ಪ್ರಾಯೋಗಿಕ ಅನುಭವದಿಂದ ಮೂಡಿ ಬಂದಿರುವುದಿಲ್ಲ.

ಹಲವು ಸಂದರ್ಭಗಳಲ್ಲಿ ಈ ಎಷ್ಟೋ ಲೇಖನ ಬರೆಯುವ 'ಕೃಷಿ ತಜ್ಞರು' ಮತ್ತು 'ಕೃಷಿ ವಿಜ್ಞಾನಿ'ಗಳೆನ್ನಿಸಿಕೊಂಡವರಿಗೆ ಕೃಷಿಕರ ಕಾರ್ಯಕ್ರಮ, ಸಮಸ್ಯೆಗಳೇನೆಂಬುದೇ ಗೊತ್ತಿರುವುದಿಲ್ಲ ಹಾಗೂ **ಕೃಷಿಕರಿಗೆ ಏನು ಬೇಕೆಂಬುದರ ಗೊಡವೆ ಕೂಡ ಇರುವುದಿಲ್ಲ.** "ಇಂಥವರ ಇಂತಿಷ್ಟು ಲೇಖನಗಳು ಕೃಷಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ" ಎಂಬಂಥ ಖ್ಯಾತಿ–ಪ್ರತಿಷ್ಠೆಗಳಿಗಾಗಿ ಮಾತ್ರವೇ ಬರೆದ ಲೇಖನಗಳೇ ತುಂಬಿರುತ್ತವೆ ಎಂದು 'ಶ್ರೀ' ಪಡ್ರೆ ಕಟುವಾಗಿ ನುಡಿದರು.

### ಮೂಗು ಮುರಿಯುವವರು

ಈ ಎಲ್ಲ ಕಾರಣಗಳಿಂದ ಕೃಷಿ ಪತ್ರಿಕೆಗಳೆಂದರೆ ರೈತರು ಮೂಗು ಮುರಿಯುವಂತಾಗಿದೆ ಎಂದು ವಿಶ್ಲೇಷಿಸಿದ ಅವರು, ಈ ಪರಿಸ್ಥಿತಿ ಬದಲಾಗಬೇಕಾದರೆ, ರೈತರೇ ತಮ್ಮ ಅನುಭವಗಳನ್ನು, ಅನಿಸಿಕೆಗಳನ್ನು, ಸಮಸ್ಯೆ ಕುಂದು–ಕೊರತೆಗಳನ್ನು ಈ ಕೃಷಿ ಪತ್ರಿಕೆಗಳಿಗೆ ಬರೆಯಬೇಕು. "ನಮಗೆ ಬರೆಯಲು ಬರುವುದಿಲ್ಲ" ಎಂಬ ಕೀಳರಿಮೆ, ಭ್ರಮೆ ಸಲ್ಲದು. ಪತ್ರಿಕೆಗೆ ಬೇಕಾದ ಕ್ಲಿಷ್ಟವಾದ ಭಾಷೆ, ರೂಢಿಯಿಲ್ಲದಿರಬಹುದು. ಆದರೆ ಅದೊಂದು ಕೊರತೆಯಲ್ಲ. ಲೇಖನದಲ್ಲಿ ಉಪಯುಕ್ತ ವಿಷಯಗಳಿದ್ದರೆ, ಅದರ ಭಾಷೆ ಮತ್ತು ನಿರೂಪಣೆಯನ್ನು ಸಂಪಾದಕ ಬಳಗದವರೇ ತಿದ್ದಿಕೊಳ್ಳುತ್ತಾರೆ ಎಂದೂ ಅವರು ಕೃಷಿಕರನ್ನು ಹುರಿದುಂಬಿಸಿದರು.

ನಿಮಗೆ ಬೇಕಿರುವ ಯಾವುದೇ ವಿಚಾರ ಪತ್ರಿಕೆಯಲ್ಲಿ ಬರೊಲ್ಲ ಎಂಬ ಗೊಣಗಾಟದ ಬದಲು ನೀವೇ ಅದನ್ನು ಪತ್ರಿಕೆಗೆ ಬರೆಯಿರಿ. ಕಡೇ ಪಕ್ಷ, 'ನಮಗೆ ಇಂಥಿಂಥ ವಿಚಾರದ ಲೇಖನ ಬೇಕು, ಪ್ರಕಟಿಸಿ' ಎಂತಲಾದರೂ ಪತ್ರಿಕೆಗೆ ಬರೆಯಿರಿ. ಆ ವಿಚಾರಗಳ ಬಗ್ಗೆ ವಿವರವೋ, ಮಾಹಿತಿಯೋ ಎಲ್ಲಿ, ಯಾರಲ್ಲಿ ಸಿಗುತ್ತದೆ ಎಂಬುದನ್ನಾದರೂ ಪತ್ರಿಕೆಗೆ ಬರೆದು ತಿಳಿಸಿ— ಎಂದೂ ಅವರು ಕೃಷಿಕರಿಗೆ ಕಿವಿಮಾತು ಹೇಳಿದರು.

### ತೊಡಗಿಸಿಕೊಳ್ಳದಿದ್ದರೆ........

ಕೃಷಿ ಪತ್ರಿಕೆಯೇ ಆಗಿರಲಿ, ಬೇರೆ ಸಾರ್ವತ್ರಿಕ ಪತ್ರಿಕೆಯೇ ಆಗಿರಲಿ, ಪತ್ರಿಕೆಯೊಂದರಲ್ಲಿ ತೊಡಗಿಸಿಕೊಳ್ಳುವುದೆಂದರೆ ಹೀಗೆ ಎಂದು ವಿವರಿಸಿದ ಅವರು, ಹೀಗೆ ಕೃಷಿಕರು ಮುಂದೆ ಬರದಿದ್ದರೆ ಕೃಷಿ ಪತ್ರಿಕೆಯೊಂದರ ಪರಿಸ್ಥಿತಿ ಏನಾಗಬಹುದೆಂಬುದಕ್ಕೆ ಸಂಬಾರ ಮಂಡಳಿಯ 'ಸ್ಪೈಸಸ್ ಇಂಡಿಯಾ' ಪತ್ರಿಕೆಯನ್ನು ಉದಹರಿಸಿದರು. ಆ ಪತ್ರಿಕೆ ಮೊದಲು ಪೂರೈಕೆದಾರರ ಹಾಗೂ ಕೃಷಿಯ ಖಾಸಾ ಅನುಭವವಿರದ ವಿಜ್ಞಾನಿಗಳ ಲೇಖನಗಳಿಂದಲೇ ತುಂಬಿರುತ್ತಿತ್ತು. ಕನ್ನಡಿಗರಾದ ಶಿವರಾಂ ಪೈಲೂರು ಅದರ ಸಂಪಾದಕತ್ವ ವಹಿಸಿಕೊಂಡ ನಂತರ, ಅದನ್ನೊಂದು ನಿಜವಾಗಿ ಕೃಷಿಕರ ಪತ್ರಿಕೆಯನ್ನಾಗಿ ಮಾಡಲು ಶ್ರಮಿಸಿದ್ದರಿಂದ ಅದು ತುಂಬ ಚೆನ್ನಾಗಿ ಮೂಡಿಬರತೊಡಗಿತು. ಇದರಿಂದ, ತಮ್ಮ ಲೇಖನಗಳಿಗೆ ಅವಕಾಶ ಕಮ್ಮಿಯಾದ ವಿಜ್ಞಾನಿಗಳು ಮತ್ತು ಪೂರೈಕೆದಾರರ ಅಸಮಾಧಾನವನ್ನೂ ಅವರು ಕಟ್ಟಿಕೊಳ್ಳಬೇಕಾಯಿತು. ಆದರೆ ಈಗ, ಕೃಷಿಕರ ಈ ತೆರನ ತೊಡಗಿಸಿಕೊಳ್ಳುವಿಕೆ ಕಮ್ಮಿಯಾದ್ದರಿಂದ, ಅವರಿಗೆ ಉಪಯುಕ್ತ ಲೇಖನಗಳ ಕೊರತೆ ಕಾಣತೊಡಗಿದ್ದು, ಅವರು ಪುನಃ ಅದೇ ವಿಜ್ಞಾನಿಗಳ ಹಾಗೂ ಪೂರೈಕೆದಾರ ಶಿಬಿರಗಳ ಕಡೆ ನೋಡಬೇಕಾದ ಹತಾಶೆಯ ಪರಿಸ್ಥಿತಿ ಬರುತ್ತಿದೆ. ಇದರಿಂದ **ಕೃಷಿಕರಿಗೇ ನಷ್ಟ** ಎಂದು ಪಡ್ರೆಯವರು ಎಚ್ಚರಿಸಿದರು.

### ಕೃಷಿಗೇ ಪ್ರತ್ಯೇಕ ಮಾಧ್ಯಮ

ಕೃಷಿ ರಂಗಕ್ಕೇ ಪ್ರತ್ಯೇಕವಾದ ಮಾಧ್ಯಮ ಏಕೆ ಬೇಕೆಂಬುದಕ್ಕೆ ಕಾರಣಗಳನ್ನು ನೀಡಿದ ಈ ಕೃಷಿಕ ಸಂಪಾದಕರು, ಇಂದಿನ ಸಾರ್ವತ್ರಿಕ ಪತ್ರಿಕೆಗಳಲ್ಲಿ ಸಿನಿಮಾದಂಥ ರಂಗಕ್ಕೆ ಪುಟಗಳನ್ನು ಮೀಸಲಿಟ್ಟಂತೆ, ಕೃಷಿಯ ವಿಚಾರಗಳು ಹಾಗೂ ಗ್ರಾಮೀಣ ಪರಿಸ್ಥಿತಿಯ ಪ್ರಕಟಣೆಗೇ ಮೀಸಲಾದ ಎಷ್ಟು ಪುಟಗಳು ಸಿಗುತ್ತವೆ; ಹೀಗೆ ಕೃಷಿ ರಂಗಕ್ಕಾಗಿ ಪುಟಗಳನ್ನು ಮೀಸಲಿಟ್ಟ ಎಷ್ಟು ಪತ್ರಿಕೆಗಳಿವೆ? ಎಂದು ಪ್ರಶ್ನಿಸಿದರು. ನಾಡಿನಾದ್ಯಂತ ಬೆಳೆಯುವ ಕೃಷ್ಯುತ್ಪನ್ನಗಳು ಬೇರೆ ಬೇರೆ ಇರಬಹುದು; ಆದರೂ ಇಡೀ ಕೃಷಿ ಸಮುದಾಯದಲ್ಲಿ ಸಮಾನವಾದ ಸಮಸ್ಯೆ, ಆಸಕ್ತಿ, ಸುಖ–ದುಃಖ, ಲಾಭ-ನಷ್ಟಗಳಿವೆ. ಅವುಗಳ ಬಗ್ಗೆ ಪರಸ್ಪರ ವಿಚಾರ ವಿನಿಮಯಕ್ಕಾಗಿ ಕೃಷಿಗೇ ಮೀಸಲಾದ ಮಾಧ್ಯಮದ ಅಗತ್ಯವಿದೆ ಎಂದು ಪ್ರತಿಪಾದಿಸಿದರು.

ರೈತರ ಅನುಭವಗಳು, ವಿಶಿಷ್ಟ ಸಮಸ್ಯೆಗಳ ಪರಿಹಾರದಲ್ಲಿ ಅವರ ಯಶಸ್ಸು–ಸಾಧನೆಗಳು ಇಂದು 'ಗೋಡೆ' ಗಳೊಳಗೇ ಉಳಿದುಹೋಗುತ್ತಿವೆ. ಅವುಗಳು ಬೆಳಕಿಗೆ ಬಂದರೆ ಸಾವಿರಾರು ಮಂದಿಗೆ ಪ್ರಯೋಜನವಾಗಬಹುದು ಹಾಗೆಯೇ, ಹೊಸ ಹೊಸ ತಂತ್ರಜ್ಞಾನಗಳು, ಆಗ್ರೋ ಉತ್ಪನ್ನಗಳು, ಹೊಸ ಹೊಸ ವಿಧಾನಗಳು–ಇವುಗಳ ಗುಣಾವಗುಣ ವಿಶ್ಲೇಷಣೆ, ಮೌಲ್ಯಮಾಪನ, ಸಾಧಕ–ಬಾಧಕಗಳ ಪರಿಚಯಕ್ಕೂ ಕೃಷಿ ಮಾಧ್ಯಮ ಒಳ್ಳೆಯ ವಾಹಕವಾಗಬಲ್ಲುದು. ಎಲ್ಲಕ್ಕಿಂತ ಮುಖ್ಯವಾಗಿ, ನಮ್ಮ ಸಮಸ್ಯೆಗಳನ್ನು ಅಧಿಕಾರ ಸೂತ್ರ ಹಿಡಿದವರಿಗೆ ಮನವರಿಕೆ ಮಾಡಿಕೊಡುವುದಕ್ಕೂ ಈ ಮಾಧ್ಯಮ ಬಹಳ ಪರಿಣಾಮಕಾರಿ ಸಾಧನವಾಗಬಲ್ಲುದು ಎಂದು ಶ್ರೀಯುತರು ವಿವರಿಸಿದರು.

### ಕೃಷಿ ವಿ. ವಿ. ಗಳ ನಿಷ್ಕಾಳಜಿ

ಪ್ರತಿಯೊಂದು ಕೃಷಿ ವಿಶ್ವವಿದ್ಯಾಲಯದಲ್ಲೂ ವಿಸ್ತರಣಾ ವಿಭಾಗವೆಂಬುದಿದ್ದು, ಪ್ರಯೋಗ ಶಾಲೆಯಲ್ಲಿ ಕಂಡು ಹಿಡಿದ ಅಂಶಗಳನ್ನು ಕೃಷಿ ಕ್ಷೇತ್ರಕ್ಕೆ ಮುಟ್ಟಿಸುವ ಹಾಗೂ ಈ ಎರಡೂ ತುದಿಗಳಿಗೆ ಸಂಪರ್ಕ ಕಲ್ಪಿಸುವ ಸೇತುವೆ ಇದಾಗಿರುತ್ತದೆ. ಇಂಥ ಹಲವು ಉದಾತ್ತ ಧ್ಯೇಯಗಳಿದ್ದಾಗ್ಯೂ ಸಹ, ಈ ವಿಭಾಗಗಳ ತಜ್ಞರು ಹಾಗೂ ಈ ವಿ ವಿ ಗಳ ಅಧಿಕಾರಿ ವರ್ಗಗಳು ಎಷ್ಟು ನಿಷ್ಕಾಳಜಿಯವರೂ ನಿರುತ್ತರ ಪ್ರವೀಣರೂ ಆಗಿರುತ್ತಾರೆಂದರೆ ಬೇರೆಲ್ಲ ವಿಚಾರ, ಮಾಹಿತಿ, ಮಾರ್ಗದರ್ಶನ ಮುಂತಾದವುಗಳ ಮಾತಿರಲಿ ಅವರು ಪ್ರಕಟಿಸುವ ಕೃಷಿ ಪತ್ರಿಕೆಯ ಸಂಚಿಕೆಯನ್ನು ಕೇಳಿ ಪತ್ರ ವ್ಯವಹರಿಸಿದರೂ ಸಹ ಉತ್ತರಿಸದಷ್ಟು ಬೇಜವಾಬ್ದಾರಿ ತೋರುತ್ತಾರೆ. ಕೃಷಿ ರಂಗಕ್ಕೆ ನೇರವಾಗಿ ಸ್ಪಂದಿಸುವ ಎಲ್ಲೋ ಒಂದೆರಡು ಸಂಸ್ಥೆಗಳು ಇಡೀ ದೇಶದಲ್ಲಿ ದೊರೆಯಬಹುದು ಅಷ್ಟೇ. ಮಿಕ್ಕವರೆಲ್ಲ ಪೂರೈಕೆದಾರರ ಏಜೆಂಟರೋ ಎಂಬಂತೆ ವರ್ತಿಸುತ್ತಾರೆ ಎಂದು ತಮ್ಮ ಕೆಲವು ಕಹಿ ಅನುಭವಗಳನ್ನು ವಿವರಿಸಿದರು.

ಆದ್ದರಿಂದ, ಕೃಷಿಯ ಬಗ್ಗೆ ಮಾಹಿತಿ, ಮಾರ್ಗದರ್ಶನಕ್ಕಾಗಿ 'ತಜ್ಞರು', 'ವಿಜ್ಞಾನಿಗಳು' ಎಂಬ ಹಣೆ ಪಟ್ಟಿ ಹೊತ್ತವರನ್ನು ಹುಡುಕುವ ಭ್ರಮೆ ಬಿಟ್ಟು, ಕೃಷಿಕರ ಅನುಭವಗಳ ವಿನಿಮಯವನ್ನೇ ಅವಲಂಬಿಸಬೇಕು. ಕೃಷಿ ಪತ್ರಿಕೆಗಳಿಗೆ ಕೂಡ ಇದು

(3ನೇ ಪುಟಕ್ಕೆ)

## ಓದುಗರ ಪತ್ರಗಳು

# ಏಕೆ ಈ ಅರ್ಥಹೀನ ತಾರತಮ್ಯ ?

ಪ್ರಿಯ ಓದುಗರೆ,

ಎಸ್ಸೆಸ್ಸೆಲ್ಸಿ ಫಲಿತಾಂಶ ಬಂದಿದೆ. ಈ ಫಲಿತಾಂಶ ಬಂದ ಕೂಡಲೇ ಹಾಗೂ ಫಲಿತಾಂಶ ಬರುವುದಕ್ಕೆ ಸ್ವಲ್ಪ ದಿನಗಳ ಮೊದಲಿನಿಂದಲೇ ವಿದ್ಯಾರ್ಥಿಗಳೂ ಅವರ ಪೋಷಕರೂ ಎದುರಿಸಲೇ ಬೇಕಾಗುವ ಒಂದು ಗೊಂದಲದ ಪ್ರಶ್ನೆ: ಮುಂದೆ ಯಾವ ವಿಭಾಗವನ್ನು ಆಯ್ದುಕೊಳ್ಳುವುದು ಅಥವಾ ಯಾವ ವಿಭಾಗಕ್ಕೆ ಸೇರಿಸುವುದು ? ಎಂಬುದು.

ಹತ್ತನೇ ತರಗತಿಯಲ್ಲಿ ಮುಂದಿನ ವಿದ್ಯಾಭ್ಯಾಸಕ್ಕೆ ಯಾವುದೇ ರೀತಿಯ ಸಹಾಯವೂ ದೊರೆಯದೆ ಅಪಕ್ವ ಮನದ ಪ್ರೌಢ ವಿದ್ಯಾರ್ಥಿಗಳಿಗೆ 'ಅಪ್ಪ ನೆಟ್ಟ ಆಲದ ಮರಕ್ಕೆ ನೇಣು ಹಾಕಿಕೊಳ್ಳುವುದೇ' ಗತಿಯಾಗುತ್ತಿದೆ. ಮನೆಯಲ್ಲಿ ಹಿರಿಯರಾದ ಅಕ್ಕ-ಅಣ್ಣಂದಿರು ತೆಗೆದುಕೊಳ್ಳುವ ವಿಭಾಗವೇ ಸಾಮಾನ್ಯವಾಗಿ ಅವರಿಗೂ ಕಟ್ಟಿಟ್ಟ ಬುತ್ತಿ. ಇನ್ನುಳಿದವರಿಗೆ ಅವರಿವರ ವಿಚಾರ ಧಾರೆಗಳ ಕಲಸು ಮೇಲೋಗರದ ತುಣುಕಾಗಿ, ಕಡೆಗೆ ಈ ಕಾಲೇಜ್ ಎಂಬ ಪೆಡಂಭೂತದ ಸಹವಾಸವೇ ಸಾಕೆಂಬ ಹತಾಶಾ ಮನೋಭಾವ

ಈಚೆಗೆ ನೀವು ಆಯ್ದುಕೊಳ್ಳುತ್ತಿರುವ ವಿಭಾಗವೂ ಪ್ರತಿಷ್ಠೆಯ ಲಾಂಛನವಾಗುತ್ತಿರುವುದು ನಿಮಗೆ ಅರಿವಾಗಿರಬಹುದು. ಸೈನ್ಸ್ ತೆಗೆದುಕೊಳ್ಳುವವರು ಬುದ್ಧಿವಂತರಾದರೆ ಆರ್ಟ್ಸ್ ತೆಗೆದುಕೊಳ್ಳುವವರು ಯಾರದೋ ಪುಣ್ಯದಿಂದ ಪಾಸಾದ ಶತ ದಡ್ಡರು. ಇನ್ನು ಕಾಮರ್ಸ್ ಎಂಬ ಇನ್ನೊಂದು ವಿಭಾಗವಿಲ್ಲವೆ ? ಅದು ಅತ್ತಲೂ ಸಲ್ಲದ, ಇತ್ತಲೂ ಬಾರದ ಎಡಬಿಡಂಗಿಗಳ ವಿಭಾಗ. ಇದು ಇಂದು ಸಾರ್ವತ್ರಿಕವಾಗಿ ರೂಢಿಯಲ್ಲಿರುವ 'ವಿಚಾರ ಧಾರೆ'ಯಾಗಿದೆ !

ಒಳ್ಳೆಯ ಅಂಕ ಗಳಿಸಬಹುದೆಂಬ ನಿರೀಕ್ಷೆ ಇರುವ ವಿದ್ಯಾರ್ಥಿಗಳು ಆರ್ಟ್ಸ್ ತೆಗೆದುಕೊಳ್ಳುವೆನೆಂದ ಕೂಡಲೇ ಮೊಟ್ಟಮೊದಲಿಗೆ 'ಮನೆಯೆಂಬ ಮೊದಲ ಪಾಠಶಾಲೆ'ಯಲ್ಲಿ ನಿಮಗೆ ದೊರೆಯಲೇಬೇಕಾದ ಹಿತನುಡಿ : "ಹಾಗಾದರೆ ನೀನು ಓದು ನಿಲ್ಲಿಸಿ ಮನೆಯಲ್ಲಿಯೇ ಇರಬಹುದಲ್ಲಾ" ಎಂಬುದು ! ಹೀಗೆಂದು ಮುಂದಿನ ಭವಿಷ್ಯಕ್ಕೆ ಸುಭದ್ರ(?) ತಳಪಾಯ ಹಾಕಿ ಕೊಡುತ್ತಾರೆ. ಇದು ಅವರ ತಪ್ಪಲ್ಲ. ಹುಟ್ಟುವ ಮಗುವಿಗೆ ಸ್ಟೆತೋಸ್ಕೋಪ್ ಹಾಕಿ ಡಾಕ್ಟರ್ ಮಾಡುವ ಕನಸಿನ ಸಾಮ್ರಾಜ್ಯದಲ್ಲಿ ವಿಹರಿಸುವ ನೂರಾರು ಹೆತ್ತವರಲ್ಲಿ ಇವರೂ ಒಬ್ಬರು. (4ನೇ ಪುಟಕ್ಕೆ)

# ವರದಕ್ಷಿಣೆ ವಿರುದ್ಧ ಮಹಾ ಆಂದೋಲನವೇ ಬೇಕಾದೀತು

ಮಾನ್ಯರೆ,

ವರದಕ್ಷಿಣೆ ವಿರುದ್ಧದ ಹೋರಾಟದಲ್ಲಿ ವಕೀಲರಾದ ಶಶಿಕಲಾ ಉರಣ್ಕಾರ್‌ರವರಿಗೆ ಎಲ್ಲಾ ಮಹಿಳಾ ಸಂಘಟನೆಗಳು, ಸಾಮಾಜಿಕ ಕಾಳಜಿಯಿರುವ ಎಲ್ಲಾ ನಾಗರಿಕರು ಹಾಗೂ ಸಂಘ-ಸಂಸ್ಥೆಗಳು ಬೆಂಬಲ, ಸಹಕಾರ ನೀಡಬೇಕಾದುದು ಆದ್ಯ ಕರ್ತವ್ಯ. ಗುಣಕ್ಕಿಂತ ಹಣ, ಪ್ರತಿಷ್ಠೆಗೆ ಬೆಲೆ, ಗೌರವ ಕೊಡುತ್ತಿರುವ ನಮ್ಮ ಸಮಾಜಕ್ಕೆ ಚಿಕಿತ್ಸೆ ನೀಡಲು ಮಹಾ ಆಂದೋಲನವೇ ಬೇಕಾದೀತು.

ವಿದ್ಯಾವಂತರು ಎಂದರೆ ಅಕ್ಷರ ಓದಲು ಬರೆಯಲು ಬರುವ ಜನರು ಎಂಬ ಅರ್ಥ ಕಲ್ಪಿಸಬೇಕಾದ ಪರಿಸ್ಥಿತಿಯಿದೆ. ವಿವೇಚನೆ, ಚಿಂತನೆ, ವಿಚಾರಪರತೆ ಇಲ್ಲದ ನಮ್ಮ 'ವಿದ್ಯಾವಂತ' ಸಮಾಜಕ್ಕೆ ಇಂಥ ಅನಿಷ್ಟ, ಅನಾಗರಿಕ ಸಂಪ್ರದಾಯಗಳನ್ನು ವಿರೋಧಿಸುವ ನೈತಿಕ ಧೈರ್ಯವಿಲ್ಲದಿರುವುದು ನಮ್ಮ ಶಿಕ್ಷಣ ವ್ಯವಸ್ಥೆಯ ದುರಂತ.

—ನಂದ, ಕೊಪ್ಪ.

# ಕೃಷಿಕರ ಅನುಭವವೇ ಕೃಷಿ ಪತ್ರಿಕೆಗಳ ಬಂಡವಾಳ

(2ನೇ ಪುಟದಿಂದ)

ಅನುಭವವೇ ನಿಜವಾದ ಬಂಡವಾಳ ಎಂದು ಅವರು ಸಾರಿದರು.

ಸುಮಾರು 3 ಗಂಟೆ ಹೊತ್ತು ತೀವ್ರ ಆಸಕ್ತಿಯಿಂದ ನಡೆದ ಚರ್ಚೆಯಲ್ಲಿ ಕೊಪ್ಪ ತಾಲ್ಲೂಕು ಮಾತ್ರವಲ್ಲದೆ, ನೆರೆಯ ತಾಲ್ಲೂಕುಗಳಿಂದಲೂ ಕೃಷಿಕರು ಪಾಲ್ಗೊಂಡಿದ್ದರು. ಕೃಷಿ ಪತ್ರಿಕೆಗಳ ನಿರ್ವಹಣೆಯ (ಚಂದಾದಾರಿಕೆ, ಹಣಕಾಸು ಇತ್ಯಾದಿ) ಸಮಸ್ಯೆಯಿಂದ ಹಿಡಿದು, ಕೃಷಿ ಮಾಧ್ಯಮಗಳಿಗೆ ಲೇಖನ, ಮಾಹಿತಿಗಳನ್ನು ಒದಗಿಸುವ ಕ್ರಮ, ನೈಸರ್ಗಿಕ ಮತ್ತು ಸಹಜ ಕೃಷಿ ವಿಧಾನಗಳು, ಹಳೆಯ, ಸ್ಥಳೀಯ ತಳಿಗಳ ಬೀಜ ಸಂಗ್ರಹಣೆ, ಕೃಷಿ ಮತ್ತು ಪರಿಸರದ (ನಿಸರ್ಗ) ಅವಿನಾಭಾವ ಸಂಬಂಧ ಮುಂತಾಗಿ ಹತ್ತಾರು ವಿಷಯಗಳ ಚರ್ಚೆ ನಡೆಯಿತು.

ರೈತರ ಸಮಸ್ಯೆಗಳನ್ನು ಕೃಷಿ ಮಾಧ್ಯಮವೊಂದು ಬಹು ಕಷ್ಟದಿಂದ ಆಡಳಿತಗಾರರ ಗಮನಕ್ಕೆ ತರಬಹುದೇ ಹೊರತು ಅವುಗಳ ನಿವಾರಣೆ ಕೃಷಿಕ ಸಮುದಾಯ ಒಗ್ಗಟ್ಟಾಗಿ ಧ್ವನಿ ಎತ್ತಿ, ಅಗತ್ಯ ಬಿದ್ದಲ್ಲಿ ಚಳುವಳಿ, ಅಸಹಕಾರ ಗಳಿಗೂ ಸಿದ್ಧರಾದಾಗಲೇ ಸಾಧ್ಯ. ಇಂಥ ಸಾಮೂಹಿಕ ಚಟುವಟಿಕೆಯಿದ್ದಾಗ ಮಾತ್ರ ಪತ್ರಿಕೆಯ ಕೆಲಸ ಅದಕ್ಕೆ ಪೂರಕವಾಗಬಲ್ಲದು, ಪರಿಣಾಮಕಾರಿಯೂ ಆಗಬಲ್ಲದು. ಇಲ್ಲವಾದಲ್ಲಿ ರೈತ ಸಮುದಾಯದ ನಡುವೆ ವಿಚಾರ, ಮಾಹಿತಿಗಳ ವಿನಿಮಯ ಮಾತ್ರ ಪತ್ರಿಕೆಯಿಂದ ಸಾಧ್ಯ—ಎಂದು 'ಶ್ರೀ' ಪಡ್ರೆ ರೈತರಿಗೆ ಸ್ಪಷ್ಟಪಡಿಸಿದರು.

ಅಡಿಕೆ ಪತ್ರಿಕೆಗೆ ಬಹು ವಿಧ ಮಾಹಿತಿಗಳನ್ನು ಒದಗಿಸುತ್ತ, ಪತ್ರಿಕೆಯ ಪ್ರಸಾರ ವಿಸ್ತರಣೆಗೂ ಕೂಡ ಪ್ರತಿಫಲಾಪೇಕ್ಷೆಯಿಲ್ಲದೆ ಶ್ರಮಿಸುತ್ತಿರುವ ವಸಂತಕುಮಾರ್ ಹರ್ಡೀಕರ್ ಹಾಗೂ ಉತ್ತರ ಕನ್ನಡ ಜಿಲ್ಲೆಯ ಜಿ. ಜಿ. ಹೆಗಡೆ ಇವರುಗಳ ಕ್ರಿಯಾಶೀಲತೆಯನ್ನು ಅವರು ಶ್ಲಾಘಿಸಿದರು.

ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಬಿ.ಆರ್. ಪೂಜಾರಿ ಸ್ವಾಗತಿಸಿ, ಕೃ.ವಿ.ವಿ. ಕೇಂದ್ರದ ಅಧ್ಯಕ್ಷ ಕರಿಮನೆ ಶ್ರೀನಿವಾಸ ಶರ್ಮ ವಂದಿಸಿದರು.

# ತೆಂಗಿನಮನೆ: 2 ಕಡೆ ಬಸ್ ನಿಲುಗಡೆ ಬೇಕು

ಪ್ರಿಯರೆ,

ಕೊಪ್ಪ-ಜಯಪುರ ನಡುವಿನ ತೆಂಗಿನಮನೆಯಲ್ಲಿ ಹಿಂದಿನಿಂದಲೂ ಶಾಲೆಯ ಬಳಿ ಮತ್ತು ಅಂಗಡಿ ಬಳಿ—ಹೀಗೆ 2 ಕಡೆ ಬಸ್ ನಿಲುಗಡೆಯಿತ್ತು. ಶಾಲೆಯ ಬಳಿ ನಿಲ್ಲುವ ಪ್ರಯಾಣಿಕರಿಗೆ ಯಾವ ಸೌಕರ್ಯವಿಲ್ಲದ್ದರಿಂದ ಬಸ್ ತಂಗುದಾಣ ಕಟ್ಟಿಸುವಾಗ ಶಾಲೆಯ ಬಳಿಯೇ ಕಟ್ಟಿಸಿದೆವು.

ಆದರೆ ಇತ್ತೀಚೆಗೆ ಶಿವಮೊಗ್ಗ-ಕೊಟ್ಟಿಗೆಹಾರ ಮಲ್ಲಿಕಾರ್ಜುನ ಬಸ್ ಮುಂತಾದ ಹಲವು ಬಸ್‌ಗಳು ಶಾಲೆಯ ಬಳಿ ಮಾತ್ರ ನಿಲ್ಲುತ್ತಿವೆ. ಅಲ್ಲಿಂದ ಅಂಗಡಿಯವರೆಗೆ ಒಂದೂವರೆ ಫರ್ಲಾಂಗ್ ದೂರವಿದ್ದು, ಅಲ್ಲಿ ಬಸ್ ನಿಲ್ಲದಿರುವುದರಿಂದ ಬಹಳ ಮಂದಿ ಪ್ರಯಾಣಿಕರಿಗೆ ತುಂಬಾ ಅನಾನುಕೂಲವಾಗುತ್ತಿದೆ.

ಆದ್ದರಿಂದ ಸಂಬಂಧಪಟ್ಟವರು ಈ ಎಲ್ಲ ಬಸ್‌ಗಳವರಿಗೂ ಈ ಬಗ್ಗೆ ಸೂಚನೆ ಕೊಟ್ಟು ಪ್ರಯಾಣಿಕರಿಗೆ ಅನುಕೂಲ ಮಾಡಿ ಕೊಡಬೇಕಾಗಿ ಕೋರುತ್ತೇವೆ.

—ಗ್ರಾಮಸ್ಥರು, ತೆಂಗಿನಮನೆ.
(40 ಜನರ ಸಹಿಗಳಿವೆ.)

# ಕೊಪ್ಪ ಆಸ್ಪತ್ರೆಯ ಕುಂದು - ಕೊರತೆಗಳು

ಪ್ರಿಯರೆ,

ಸಾರ್ವಜನಿಕ ಆಸ್ಪತ್ರೆಯಾಗಿ ಮೇಲ್ದರ್ಜೆಗೇರಿರುವ ಕೊಪ್ಪ ಆಸ್ಪತ್ರೆ ಸುತ್ತಮುತ್ತಲ ಸಾವಿರಾರು ಹಳ್ಳಿಗಳ ಅಸಂಖ್ಯ ರೋಗಿಗಳಿಗೆ ವರದಾನವಾಗಬಲ್ಲ ಸನ್ನಿವೇಶದಲ್ಲಿದೆ.

ಆದರೆ ಇಷ್ಟು ದೊಡ್ಡ ಆಸ್ಪತ್ರೆಯಲ್ಲಿ ಮಕ್ಕಳ ತಜ್ಞರು, ಕಿವಿ-ಮೂಗು-ಗಂಟಲು ತಜ್ಞರು ಹಾಗೂ ಮೂಳೆ ತಜ್ಞರು ಇಲ್ಲ. ಹಿಂದೆ ಮಕ್ಕಳ ತಜ್ಞರು ಹಾಗೂ ಕಿವಿ-ಮೂಗು-ಗಂಟಲು ತಜ್ಞರು ಇಲ್ಲಿ ಉತ್ತಮ ಸೇವೆ ಸಲ್ಲಿಸಿ ಜನಾದರಕ್ಕೆ ಪಾತ್ರರಾಗಿದ್ದರು. ಆದರೆ ಅನಂತರ ಈ ಹುದ್ದೆಗಳು ಖಾಲಿಯಾಗಿವೆ.

ಅಡಿಕೆ ಕೊನೆ ತೆಗೆಯುವವರು ಮತ್ತು ಇತರ ಹಲವು ಕೃಷಿ ಕಾರ್ಮಿಕರು ಮರದಿಂದ ಬಿದ್ದು ಮೂಳೆ ಮುರಿತಕ್ಕೊಳಗಾಗುವ ಸಂದರ್ಭ-ಸಾಧ್ಯತೆಗಳು ಇಲ್ಲಿ ತೀರಾ ಹೆಚ್ಚಾಗಿದ್ದು, ಅಂಥವರನ್ನು ಹಳ್ಳಿಯ ಮೂಲೆಯಿಂದ ತೀರ್ಥಹಳ್ಳಿಗೋ ದೂರದ ಮಣಿಪಾಲಕ್ಕೋ ಕರೆದೊಯ್ಯುವುದು ಎಷ್ಟೋ ಸಂದರ್ಭಗಳಲ್ಲಿ ಅಸಾಧ್ಯದ ಮಾತಾಗಿದೆ. ಆದ್ದರಿಂದ ಇಲ್ಲಿ ಮೂಳೆ ತಜ್ಞರ ಅವಶ್ಯಕತೆ ತೀರಾ ಇದೆ.

ಕೇಂದ್ರ ಸರ್ಕಾರದ ಯೋಜನೆಯಡಿ ಇಲ್ಲಿ ಒಬ್ಬರು ಪ್ರಸೂತಿ ತಜ್ಞರ ಹುದ್ದೆ ಖಾಲಿ ಇದೆ. ಸುತ್ತಮುತ್ತ ಸಮೀಪದಲ್ಲೆಲ್ಲೂ ಖಾಸಗಿ ನರ್ಸಿಂಗ್ ಹೋಂ ಇಲ್ಲದ ಪರಿಸ್ಥಿತಿಯಲ್ಲಂತೂ ಇಲ್ಲಿ ಈ ತಜ್ಞರ ನೇಮಕ ಅತ್ಯಂತ ಅಗತ್ಯವಾಗಿದೆ.

ಎಲ್ಲಕ್ಕಿಂತ ಹೆಚ್ಚಾಗಿ ಇಷ್ಟು ದೊಡ್ಡ ಆಸ್ಪತ್ರೆಗೆ ಒಂದು ಆ್ಯಂಬುಲೆನ್ಸ್ ಇಲ್ಲ. ಇದೊಂದು ದೊಡ್ಡ ಕೊರತೆ.

ಈ ಎಲ್ಲ ಕೊರತೆಗಳ ಬಗ್ಗೆ ಹಿಂದಿನ ಸರ್ಕಾರಕ್ಕೆ ಹಲವು ಬಾರಿ ಮನವಿ ಮಾಡಿದ್ದಾಗ್ಯೂ ಪ್ರಯೋಜನವಾಗಿಲ್ಲ. ಈಗಲಾದರೂ ನಮ್ಮ ಶಾಸಕರು ಮತ್ತು ಹಿರಿಯ ಅಧಿಕಾರಿಗಳು ಈ ಕೊರತೆಗಳನ್ನು ತುಂಬಿ ಕೊಟ್ಟು, ಇದನ್ನೊಂದು ಸುಸಜ್ಜಿತ ಆಸ್ಪತ್ರೆಯಾಗಿ ಮಾಡುತ್ತಾರೆಂದು ಜನ ನಿರೀಕ್ಷಿಸುತ್ತಿದ್ದಾರೆ.

ನಾಗರಿಕರ ಪರವಾಗಿ,
—ಬಿ.ಎಲ್. ಅಶೋಕರಾವ್,
ಬಾಳಗಡಿ, ಕೊಪ್ಪ.

# ಮಕ್ಕಳಿಗೂ ಪೋಷಕರಿಗೂ ಈ ಹೊರೆ ಎಲ್ಲ ಅಗತ್ಯವೆ, ಅನಿವಾರ್ಯವೆ?

ಪ್ರಿಯರೆ,

ಬೇಸಿಗೆ ರಜೆ ಕಳೆದು ಪುನಃ ಶಾಲೆಗಳು ಆರಂಭವಾಗುವ ಸಮಯ ಬರುತ್ತಿದೆ. ತಂದೆ-ತಾಯಂದಿರಿಗೆ ಮಕ್ಕಳ ವಿದ್ಯಾಭ್ಯಾಸದ ತವಕ. ಕೂಲಿ-ನಾಲಿ ಮಾಡಿ ಹೊಟ್ಟೆ-ಬಟ್ಟೆ ಕಟ್ಟಿಯಾದರೂ ಮಕ್ಕಳನ್ನು ಓದಿಸಬೇಕೆಂಬ ಪ್ರಜ್ಞೆ ಇಂದು ಬಡ ವರ್ಗಗಳಲ್ಲಿ ಕೂಡ ಬೆಳೆಯುತ್ತಿರುವುದು ಆಶಾದಾಯಕ ಸಂಗತಿ. ಬಡತನ, ನಿರುದ್ಯೋಗಗಳನ್ನು ಹೋಗಲಾಡಿಸಲು ವಿದ್ಯೆ ಇಂದು ಅತಿ ಮುಖ್ಯ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ.

ಆದರೆ ಶಿಕ್ಷಣ ಪಡೆಯಬಯಸುವ ಮಕ್ಕಳಿಗೆ ಹಾಗೂ ಅವರ ಪೋಷಕರಿಗೆ ಇಂದು ಎಷ್ಟೊಂದು ಹೊರೆ ಬೀಳುತ್ತಿದೆ. ಪುಸ್ತಕ, ಶಾಲಾ ಶುಲ್ಕ, ಸಮವಸ್ತ್ರ, ಛತ್ರಿ ಮುಂತಾದ ಅಗತ್ಯಗಳ ಜೊತೆಗೆ ಮಕ್ಕಳಿಗೆ ಕಡ್ಡಾಯವಾಗಿ ತರಲು ಹೇಳುವ ನೋಟ್ ಪುಸ್ತಕಗಳು ಮಕ್ಕಳಿಗೂ ಪೋಷಕರಿಗೂ ದೊಡ್ಡ ಹೊರೆಯಾಗಿವೆ. ನೀಟ್, ರಫ್, ಮನೆ ಕೆಲಸ, ಚಿತ್ರ, ಪತ್ರ—ಹೀಗೆ ನಾನಾ ವಿಧದ ಸುಮಾರು 25-30 ನೋಟ್ ಪುಸ್ತಕಗಳು ಪ್ರಾಥಮಿಕ ಶಾಲೆಯಿಂದಲೂ ಮಕ್ಕಳಿಗೆ ಕಡ್ಡಾಯವಾಗುತ್ತಿವೆ.

ಕೆಲವು ಅಧ್ಯಾಪಕರಂತೂ ದಪ್ಪ ರಟ್ಟಿನ ಪುಸ್ತಕಗಳನ್ನೇ ಕಡ್ಡಾಯ ಮಾಡಿ, ತೆಳು ರಟ್ಟಿನ ಪುಸ್ತಕ ಕಂಡರೆ ಹರಿದು ಬಿಸಾಡುತ್ತಾರೆ. ಇದೆಲ್ಲ ಮಕ್ಕಳ ಮನಸ್ಸನ್ನು ಎಷ್ಟೊಂದು ಘಾಸಿಗೊಳಿಸುತ್ತದೆಂದು ಅವರು ಅರಿಯಲಾರರೆ? ಹೀಗೆ ಹೊರಲಾರದ ಹೊರೆ ಹೊತ್ತು ನಿತ್ಯವೂ ನಾಲ್ಕಾರು ಮೈಲಿ ನಡೆಯಬೇಕಾದ ಮಕ್ಕಳ ಪಾಡಂತೂ ತೀರಾ ಶೋಚನೀಯ. ಇನ್ನು, ಕಷ್ಟದಿಂದ ಮಕ್ಕಳನ್ನು ಶಾಲೆಗೆ ಸೇರಿಸುವ ತಂದೆ - ತಾಯಿಗಳ ಪಾಡೂ ಅಷ್ಟೆ. ಹೀಗಾಗಿ ಎಷ್ಟೋ (4ನೇ ಪುಟಕ್ಕೆ)

# ವಿಷಯದ ಆಯ್ಕೆಯಲ್ಲೇಕೆ ಈ ಅರ್ಥಹೀನ ತಾರತಮ್ಯ ?

(3ನೇ ಪುಟದಿಂದ)

ಇನ್ನು ನಿಮ್ಮ ನಿರ್ಧಾರಕ್ಕೆ ನಿಮ್ಮ ಸಹಪಾಠಿಗಳ 'ಅನೋಘ' ಪ್ರೋತ್ಸಾಹ ದೊರೆಯುವುದಂತೂ ನಿಶ್ಚಿತ. "ಏನಮ್ಮಾ, ರಾಜಕಾರಣಿಯಾಗುತ್ತೀಯಾ?" ಎಂಬ ಕುಹಕದ ಉದ್ಗಾರ. ಇವರೆಲ್ಲಾ ಸಾಮಾನ್ಯ ಜನರು ಬಿಡಿ. ಕಾಲೇಜು, ಹೈಸ್ಕೂಲುಗಳಿಗೆ ಪಾಠ ಹೇಳುವ ವಿದ್ಯಾವಂತ, ಪ್ರಜ್ಞಾವಂತ ಜನರ ಅಭಿಪ್ರಾಯ ಕೇಳುವಿರಾ ?

"ಆ........ಟ್ರ್ಸ್........? ಅದೇನದು ? ಸೈನ್ಸ್ ತೆಗೆದುಕೊಂಡು ಮೆಡಿಕಲ್‌ಗೋ ಇಂಜಿನಿಯರಿಂಗ್‌ಗೋ ಹೋಗಮ್ಮಾ. ತುಂಬಾ ದುಡ್ಡು ಮಾಡಬಹುದು...." ಎಂಬ ಅತ್ಯಮೂಲ್ಯ ಉಪದೇಶಾಮೃತ. ಇಂತಹ ಮಹಾನುಭಾವರೇ ಪ್ರತಿಷ್ಠಾಪಿತಗೊಂಡಿರುವ ನಮ್ಮ ರಾಷ್ಟ್ರದಲ್ಲಿ ಡಾಕ್ಟರ್, ಇಂಜಿನಿಯರ್‌ಗಳು ಮಾತ್ರ 'ಗೌರವಾನ್ವಿತರು'. ಉಳಿದವರು ವಿದ್ಯಾವಂತರೇ ಅಲ್ಲ. ವಿದ್ಯಾವಂತರಾದರೂ ಅವರದು ಕೆಲಸಕ್ಕೆ ಬಾರದ ವಿದ್ಯೆ. ಹೀಗಾದರೆ ದೇಶದ ಉದ್ದಗಲಕ್ಕೂ ಡಾಕ್ಟರು, ಇಂಜಿನಿಯರುಗಳು ತುಂಬಿ ತುಳುಕಾಡದೆ ಇನ್ನೇನಾದಾರು ?

ನಾನೇನು ವಿಜ್ಞಾನದ ಶತ್ರುವಲ್ಲ. ಮಾನವನ ಅಭಿವೃದ್ಧಿಯ ಹಿಂದೆ ನೆರಳಿನಂತಿರುವುದೇ ವಿಜ್ಞಾನ. ಆದರೆ ಪ್ರತಿಭೆಯ ಮಾನದಂಡವೂ ವಿಜ್ಞಾನವೇ ಆಗಬೇಕೆ ? ಹಾಗಾದಲ್ಲಿ ಆರ್ಟ್ಸ್ ಹಾಗೂ ಕಾಮರ್ಸ್‌ಗಳೆಂಬ ವಿಭಾಗಗಳಿಗೆ ಇಂತಿಷ್ಟು ಅಂಕವೆಂದು ನಿಗದಿಪಡಿಸಬಹುದಲ್ಲ ?

ನಮ್ಮ ಆಸೆ ಆಕಾಂಕ್ಷೆಗಳ ಗೋರಿಗಳ ಮೇಲೆ ಯಾವುದೋ ವಿಭಾಗವನ್ನಾಯ್ದುಕೊಂಡು ನಿರಾಸಕ್ತಿಯಿಂದ ಅಭ್ಯಸಿಸುತ್ತಿರುವ ಸಹಸ್ರಾರು ನತದೃಷ್ಟ ವಿದ್ಯಾರ್ಥಿಗಳಲ್ಲಿ ನಾವೂ ಕೆಲವರಾಗುತ್ತೇವೇನೋ? ವಿದ್ಯಾರ್ಥಿ ಜೀವನದಿಂದಲೇ ಬಾಡಿದ ಮುಖ ಹೊತ್ತು, ಉಲ್ಲಾಸರಹಿತವಾಗಿ ಬರಡಾಗಿ ಬಾಳುವ 'ನಮ್ಮಂಥವರಿಂದ ಯಾವ ಬಗೆಯ ದೇಶ ಸೇವೆ ಸಾಧ್ಯ ? ಬುನಾದಿಯನ್ನೇ ಪೊಳ್ಳಾಗಿ ರೂಪಿಸಹೊರಟಿರುವ ಓ, ನಮ್ಮ ಪೋಷಕರೆ, ಏಕೆ ಈ ಬಗೆಯ ಅರ್ಥ ಹೀನ ತಾರತಮ್ಯ ? ಪ್ರತಿಯೊಬ್ಬ ವಿದ್ಯಾರ್ಥಿಗೂ ತನ್ನದೇ ಆದ ಕನಸು, ಪ್ರತಿಭೆ, ಆಸಕ್ತಿಗಳಿರುತ್ತವೆ. ಅವರ ಆಸೆ ಆಕಾಂಕ್ಷೆಗಳಿಗೆ ನೀರು ಗೊಬ್ಬರ ಹಾಕಿ ಪ್ರೋತ್ಸಾಹಿಸುವುದು ನಿಮ್ಮಿಂದ ಅಸಾಧ್ಯವಾದಲ್ಲಿ ಕೊಂಚ ಕರುಣೆ ತೋರಿ ಅವರ ವ್ಯಕ್ತಿತ್ವವನ್ನಾದರೂ ಉಳಿಯಗೊಡಿ, ಬೆಳೆಯಗೊಡಿ.

—ಎಸ್. ವಾಣಿಶ್ರೀ,
ಕೊಪ್ಪ.

# ಈ ಹೊರೆ ಅನಿವಾರ್ಯವೆ ?

(3ನೇ ಪುಟದಿಂದ)

ಪ್ರತಿಭಾವಂತ ಮಕ್ಕಳು ಮೂಲೆ ಗುಂಪಾಗುತ್ತಿದ್ದಾರೆ, ವಿದ್ಯೆಯಿಂದ ವಂಚಿತರಾಗುತ್ತಿದ್ದಾರೆ.

ಇನ್ನು ಕೆಲವು ಉಪಾಧ್ಯಾಯರುಗಳು ಬಡ ಮಕ್ಕಳನ್ನು ಹೀನಾಯ ಮಾಡಿ, ಶ್ರೀಮಂತರ ಮಕ್ಕಳನ್ನು ಓಲೈಸುವುದು, ಶಾಲೆಯಲ್ಲಿ ಬೇಕೋ ಬೇಡವೋ ಎಂಬಂತೆ ಪಾಠ ಮಾಡಿ, ಮನೆ ಪಾಠಕ್ಕೆ ಮಕ್ಕಳಿಗೆ ಕಡ್ಡಾಯಗೊಳಿಸಿ, ಮನೆ ಪಾಠ ಹೇಳಿಸಿಕೊಳ್ಳದಿದ್ದರೆ ಖಂಡಿತ ಫೇಲಾಗುತ್ತೀಯೆಂದು ಹೆದರಿಸುವುದು; ಇನ್ನು ಕೆಲವು ಶಿಕ್ಷಕರು ಬೇಜವಾಬ್ದಾರಿಯಿಂದ, "ನೀವು ಕಲಿಯಿರಿ, ಬಿಡಿ, ನಮಗೆ ಸಂಬಳವಂತೂ ಬರುತ್ತೆ" ಎಂದು ಮಕ್ಕಳೆದುರೇ ಹೇಳುತ್ತ ಅದರಂತೆಯೇ ನಿರ್ಲಕ್ಷ್ಯ ಮಾಡುವುದು—ಇಂಥದೆಲ್ಲ ಇಂದು ಬಹಳ ಹೆಚ್ಚುತ್ತಿದೆ,

ಇದೆಲ್ಲ ನ್ಯಾಯವೆ ? ಮಕ್ಕಳಿಗೂ ಪೋಷಕರಿಗೂ ಇಷ್ಟೊಂದು ನೋಟ್ ಪುಸ್ತಕ, ಮನೆ ಪಾಠಗಳಂಥ ಹೊರೆಗಳೆಲ್ಲ ಆಗತ್ಯವೆ? ಇದೆಲ್ಲ ಇಲ್ಲದೆಯೂ ಹಿಂದೆಲ್ಲ ಕಲಿತು ಪ್ರಕಾಂಡ ಪಂಡಿತರುಗಳಾಗಿಲ್ಲವೆ ?

ಮುಂದಾದರೂ ಉಪಾಧ್ಯಾಯ ವರ್ಗದವರು ಈ ವಿಚಾರಗಳ ಕಡೆ ಗಮನ ಹರಿಸಿ ಈ ಎಲ್ಲ ಹೊರೆಗಳನ್ನೂ, ಹೊಣೆಗೇಡಿತನಗಳನ್ನೂ ಕಡಿಮೆ ಮಾಡಿ, ಸಮಾಜಕ್ಕೆ ಮಾರ್ಗದರ್ಶಿಗಳೆಂಬ ತಮ್ಮ ಹೆಗ್ಗಳಿಕೆಯನ್ನು ಉಳಿಸಿಕೊಳ್ಳುತ್ತಾರೆಯೆ ?

—ಎ. ಆರ್. ಸುರೇಶ, ಅರೆಹಳ್ಳಿ.

## ಕರಾಟೆ ಪ್ರಶಸ್ತಿಗಳು

ಕೊಪ್ಪ: ಮೇ 13ರಂದು ಮಂಗಳೂರಿನ ಭಾರತೀಯ ವಿದ್ಯಾಭವನದಲ್ಲಿ ನಡೆದ ದಕ್ಷಿಣ ಕನ್ನಡ ಕರಾಟೆ ಛಾಂಪಿಯನ್ ಶಿಪ್ ... ದ್ಯಗಳಲ್ಲಿ ಕೊಪ್ಪದ ಕರಾಟೆ ಶಿಕ್ಷಕ ಗೋಪಿನಾಥ ಪ್ರಭು ಕಲರ್ ಬೆಲ್ಟ್ 'ಬಿ' ವಿಭಾಗದಲ್ಲಿ ಪ್ರಥಮ ಸ್ಥಾನವನ್ನೂ, ಕೊಪ್ಪ ಕರಾಟೆ ವಿದ್ಯಾರ್ಥಿಗಳಾದ ಕಳಸಾಪುರ ಎಸ್ಟೇಟಿನ ಡೆರಿಲ್ ಕುಲಾಸೋ 'ಎ' ವಿಭಾಗದಲ್ಲಿ ತೃತೀಯ ಸ್ಥಾನ ಹಾಗೂ 12 ವರ್ಷದೊಳಗಿನವರ ವಿಭಾಗದಲ್ಲಿ ಗ್ರೆಗೋರಿ ಡಯಾಸರ ಮಗ ರೋನಾಲ್ಡ್ ಡಯಾಸ್ ತೃತೀಯ ಸ್ಥಾನವನ್ನೂ ಪಡೆದಿದ್ದಾರೆ.

## ಅಡಿಕೆ ಧಾರಣೆ

ಶಿವಮೊಗ್ಗ : 18-5-1990
ಸರಕು : 4169-4619
ಬೆಟ್ಟೆ : 3200-3549
ಗೊರಬಲು : 2016-2429

# ರಕ್ಷಣಾ ಪಡೆ ಹುದ್ದೆಗಳಿಗೆ ಅರ್ಜಿ ಆಹ್ವಾನ

ಚಿಕ್ಕಮಗಳೂರು : ಕೇಂದ್ರ ಲೋಕ ಸೇವಾ ಆಯೋಗದವರು 1990ನೇ ಅಕ್ಟೋಬರ್‌ನಲ್ಲಿ ನಡೆಸಲಾಗುವ ಕಂಬೈನ್ಡ್ ಡಿಫೆನ್ಸ್ ಸರ್ವಿಸಸ್ ಎಕ್ಸಾಮಿನೇಷನ್ ಪರೀಕ್ಷೆಗೆ ಅರ್ಹ **ಅವಿವಾಹಿತ** ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದಾರೆ

ಇಂಡಿಯನ್ ಮಿಲಿಟರಿ ಅಕಾಡೆಮಿಯ 150 ಹುದ್ದೆಗಳು ಖಾಲಿ ಇದ್ದು, ಅಭ್ಯರ್ಥಿಯು 18ರಿಂದ 24 ವರ್ಷ ವಯೋಮಿತಿಯವರಾಗಿರಬೇಕು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಾಸಾಗಿರಬೇಕು.

ನೇವಲ್ ಅಕಾಡೆಮಿಯ 14 ಹುದ್ದೆಗಳು ಖಾಲಿ ಇದ್ದು 18ರಿಂದ 21ರ ವಯೋಮಿತಿಯವರಾಗಿರಬೇಕು; ಬಿ.ಎಸ್.ಸಿ. ಅಥವಾ ಇಂಜನಿಯರಿಂಗ್ ಪಾಸಾಗಿರಬೇಕು.

ಏರ್ ಫೋರ್ಸ್ ಅಕಾಡೆಮಿಯ 80 ಹುದ್ದೆಗಳು ಖಾಲಿ ಇದ್ದು 18ರಿಂದ 22ರ ವಯೋಮಿತಿಯವರಾಗಿರಬೇಕು ಪದವಿ ಅಥವಾ ತತ್ಸಮಾನ ಪರೀಕ್ಷೆ ಪಾಸಾಗಿದ್ದು, ಪಿ.ಯು.ಸಿ.ಯಲ್ಲಿ ಭೌತಶಾಸ್ತ್ರ ಅಥವಾ ಗಣಿತ ಶಾಸ್ತ್ರ ಅಭ್ಯಾಸ ಮಾಡಿರಬೇಕು.

ಆಫೀಸರ್ ಟ್ರೈನಿ ಅಕಾಡೆಮಿಯ 262 ಹುದ್ದೆಗಳು ಖಾಲಿ ಇದ್ದು ಅಭ್ಯರ್ಥಿಯು 18 ರಿಂದ 24 ವಯೋಮಿತಿಯವರಾಗಿರಬೇಕು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಾಸಾಗಿರಬೇಕು

ಭರ್ತಿ ಮಾಡಿದ ಅರ್ಜಿಯನ್ನು ಜೂನ್ 6ರೊಳಗಾಗಿ : ದಿ ಸೆಕ್ರೆಟರಿ, ಯೂನಿಯನ್ ಪಬ್ಲಿಕ್ ಸರ್ವೀಸ್ ಕಮಿಷನ್, ಧೋಲ್‌ಪುರ್ ಹೌಸ್, ನ್ಯೂ ಡೆಲ್ಲಿ-110011 ಇವರಿಗೆ ಕಳುಹಿಸಬೇಕು, ಹೆಚ್ಚಿನ ಮಾಹಿತಿಗೆ ಉದ್ಯೋಗಾಧಿಕಾರಿಗಳು, ಚಿಕ್ಕಮಗಳೂರು ಇವರನ್ನು ಸಂಪರ್ಕಿಸಬಹುದು.

## ಟೆನಿಸ್ ಬಾಲ್ ಕ್ರಿಕೆಟ್ ಟೂರ್ನಿ ಉದ್ಘಾಟನೆ

ಕೊಪ್ಪ : ಇಲ್ಲಿನ ಸನ್‌ಶೈನ್ ಕ್ರಿಕೆಟ್ ಅಸೋಸಿಯೇಶನ್ ಏರ್ಪಡಿಸಿರುವ 2ನೇ ವರ್ಷದ ಅಂತರ ತಾ॥ ಮಟ್ಟದ ಆಹ್ವಾನಿತ ಟೆನಿಸ್ ಬಾಲ್ ಕ್ರಿಕೆಟ್ ಟೂರ್ನಿಯನ್ನು ಮೇ 17 ರಂದು ಪತ್ರಕರ್ತ ಸಿರಿಮನೆ ನಾಗರಾಜ್ ಉದ್ಘಾಟಿಸಿದರು. ಎಫ್. ಸಿ. ಎ. ಅಧ್ಯಕ್ಷೆ ಪ್ರೇಮಾ ಶೆಟ್ಟಿ ಅಧ್ಯಕ್ಷತೆ ವಹಿಸಿದ್ದರು.

ಬಿ.ಎಚ್. ಎ. ರವಿ ಸ್ವಾಗತಿಸಿ, ಬಿಂದು ವಂದಿಸಿದರು. 22 ರವರೆಗೆ ನಡೆಯುವ ಈ ಟೂರ್ನಿಯಲ್ಲಿ 12 ತಂಡಗಳು ಭಾಗವಹಿಸುತ್ತಿವೆ.



**ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ**